# <u>ಕರ್ನಾಟಕ ವಿಧಾನ ಪರಿಷತ್ತು</u>

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 941 |
| ಸದಸ್ಯರ ಹೆಸರು | : | ಶ್ರೀ ಮುನಿರಾಜು ಗೌಡ ಪಿ.ಎಂ. (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವ ದಿನಾಂಕ | : | 21.12.2021 |
| ಉತ್ತರಿಸಬೇಕಾದವರು | : | ನಗರಾಭಿವೃದ್ಧಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| 1 | ರಾಜ್ಯದ ನಗರ ಪ್ರದೇಶಗಳಿಗೆ ಮಹಾಯೋಜನೆಯನ್ನು ತಯಾರಿಸುವ ಸಂದರ್ಭದಲ್ಲಿ ರಾಜ್ಯದ ಎಲ್ಲಾ ಕಡೆಯೂ ಏಕರೀತಿಯ ಮಹಾಯೋಜನೆಯನ್ನು ಸಿದ್ಧಪಡಿಸುವುದರಿಂದ ಕರಾವಳಿ ಹಾಗೂ ಮಲೆನಾಡು ಪ್ರದೇಶದ ಪಟ್ಟಣಗಳಲ್ಲಿ ಆಗಿರುವ ತೊಂದರೆಗಳ ಕುರಿತು ಸರ್ಕಾರದ ಗಮನಕ್ಕೆ ಬಂದಿದೆಯೇ; | ರಾಜ್ಯದ ಎಲ್ಲಾ ಪಟ್ಟಣಗಳಿಗೆ ಏಕರೀತಿಯ ಮಹಾಯೋಜನೆಯನ್ನು ಸಿದ್ಧಪಡಿಸುವುದಿಲ್ಲ. ಮಹಾಯೋಜನೆಯನ್ನು ಆಯಾ ಪಟ್ಟಣಗಳ ಭೌಗೋಳಿಕ ರಚನೆ, ಜನಸಂಖ್ಯೆ, ನಗರಗಳ ಬೆಳವಣಿಗೆ ಪ್ರವೃತ್ತಿ ಹಾಗೂ ಮುಂದಾಗಬಹುದಾದ ಬೆಳವಣಿಗೆಗಳನ್ನು ಅಧ್ಯಯನ ಮಾಡಿ ಮಹಾಯೋಜನೆ ಹಾಗೂ ವಲಯ ನಿಯಮಾವಳಿಗಳನ್ನು ರೂಪಿಸಲಾಗುತ್ತದೆ. ಸದರಿ ನಿಯಮಗಳನ್ನು ಆಯಾ ಪ್ರಾಧಿಕಾರಗಳು ರಚಿಸಿಕೊಳ್ಳಲು ಅವಕಾಶವಿದೆ. |
| 2 | ಹಿಂದಿನ ಮದರಾಸು ಪ್ರಾಂತ್ಯದ ಕರಾವಳಿ ಹಾಗೂ ಅರೆ ಮಲೆನಾಡು ಪ್ರದೇಶಗಳಲ್ಲಿ ಜನವಸತಿ ಪ್ರದೇಶಗಳಿಗೆ ಗ್ರಾಮಠಾಣಾ ವ್ಯಾಪ್ತಿ ನಿಗಧಿ ಆಗದಿರುವುದು ಸರ್ಕಾರಕ್ಕೆ ಅರಿವಿದೆಯೇ; | ಅನ್ವಯಿಸುವುದಿಲ್ಲ. |
| 3 | ಸದರಿ ಪ್ರದೇಶಗಳಲ್ಲಿ ಜನವಸತಿಯು ಕೃಷಿ ಜಮೀನಿನ ಮಧ್ಯದಲ್ಲಿ ಅಲ್ಲಲ್ಲಿ ಹಂಚಿಹೋಗಿದು ಏಕರೀತಿಯ ಮಹಾಯೋಜನೆಯಿಂದ ಆಗಿರುವ ತೊಂದರೆಗಳನ್ನು ನಿವಾರಿಸುವ ದೃಷ್ಟಿಯಿಂದ ಸದರಿ ಪ್ರದೇಶಗಳ ಭಾಗಕ್ಕೆ ಮಹಾ ಯೋಜನೆಯ ನಿಯಮಗಳಲ್ಲಿ ಬದಲಾವಣೆ ತರುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ-1961 ರ ಕಲಂ 13-ಇ ರಡಿ ವಲಯ ನಿಯಮಾವಳಿಗಳಿಗೆ ತಿದ್ದುಪಡಿ ಪ್ರಸ್ತಾವನೆಯನ್ನು ಸಂಬಂಧಪಟ್ಟ ಪ್ರಾಧಿಕಾರದಿಂದ ಸಲ್ಲಿಸಲು ಅವಕಾಶವಿದ್ದು, ಅದನ್ನು ಪರಿಶೀಲಿಸಿ ಅನುಮತಿಸಲು ಅವಕಾಶವಿದೆ. |
| 4 | ಹಾಗಿದ್ದಲ್ಲಿ ಈ ನಿಯಮದ ಬದಲಾವಣೆಯನ್ನು ಯಾವಾಗ ಮಾಡಲಾಗುವುದು? | ಉದ್ಭವಿಸುವುದಿಲ್ಲ. |

ಕಡತ ಸಂಖ್ಯೆ: ನಅಇ 116 ಎಲ್ಎಕ್ಯೂ 2021(ಇ)

**(ಬಿ.ಎ. ಬಸವರಾಜ)**
ನಗರಾಭಿವೃದ್ಧಿ ಇಲಾಖೆ

(ಬಿ.ಎ. ಬಸವರಾಜ)
ನಗರಾಭಿವೃದ್ಧಿ ಸಚಿವರು